

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1859 |
| ಸದಸ್ಯರ ಹೆಸರು | : | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 24-03-2020 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಘನತ್ಯಾಜ್ಯ ನಿರ್ವಹಣೆ ಇತ್ತೀಚೆಗೆ ಒಂದು ದೊಡ್ಡ ಸಮಸ್ಯೆಯಾಗಿದ್ದು ಅದರ ನಿರ್ವಹಣೆಗೆ ಫಲಪ್ರದ ಫಲಿತಾಂಶಗಳು ಸಿಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿನ ಕೆಲವೊಂದು ನಗರ ಸ್ಥಳೀಯ ಸಂಸ್ಥೆಗಳು ಘನತ್ಯಾಜ್ಯ ನಿರ್ವಹಣಾ ನಿಯಮಗಳು-2016ರ ರೀತ್ಯಾ ಘನತ್ಯಾಜ್ಯದ ಸಂಸ್ಕರಣ ಮತ್ತು ವಿಲೇವಾರಿಯಲ್ಲಿ ಉತ್ತಮ ಸಾಧನೆಯನ್ನು ಮಾಡಿರುತ್ತವೆ. ಪ್ರಸ್ತುತವಾಗಿ ರಾಜ್ಯದಲ್ಲಿ ಮನೆ-ಮನೆಗಳಿಂದ ಕಸದ ಸಂಗ್ರಹಣೆಯು ಶೇ.98.61 ಮತ್ತು ಮೂಲದಲ್ಲಿಯೇ ಕಸ ವಿಂಗಡಣೆಯು ಶೇ. 54.91, ತ್ಯಾಜ್ಯ ಸಂಸ್ಕರಣೆಯ ಶೇ. 46.55 ರಷ್ಟಿರುತ್ತದೆ. ಇನ್ನುಳಿದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಮೂಲದಲ್ಲಿಯೇ ಕಸ ವಿಂಗಡಣೆಗಾಗಿ ಒತ್ತನ್ನು ನೀಡಲಾಗುತ್ತಿದ್ದು, ಘನತ್ಯಾಜ್ಯ ವಸ್ತು ನಿರ್ವಹಣೆಯ ವಿವಿಧ ಘಟಕಗಳಲ್ಲಿ ಶೇ 100% ರಷ್ಟು ಪ್ರಗತಿಯನ್ನು ಸಾಧಿಸಲು ಶ್ರಮಿಸಲಾಗುತ್ತಿದೆ. |
| ಆ) | ರಾಜ್ಯದ ಎಷ್ಟು ಭಾಗಗಳಲ್ಲಿ ಘನತ್ಯಾಜ್ಯ ಸಂಸ್ಕರಣಾ ಘಟಕಗಳನ್ನು ಸ್ಥಾಪಿಸಲಾಗಿದೆ; ಅವುಗಳೆಲ್ಲವೂ ಹಾಲಿ ಕಾರ್ಯನಿರ್ವಹಿಸುವ ಸ್ಥಿತಿಯಲ್ಲಿವೆಯೇ; | ರಾಜ್ಯದಲ್ಲಿನ 279 ನಗರ ಸ್ಥಳೀಯ ಸಂಸ್ಥೆಗಳ ಪೈಕಿ 215 ನಗರ ಸ್ಥಳೀಯ ಸಂಸ್ಥೆಗಳು ಅಗತ್ಯ ನೆಲಭರ್ತಿ ಜಾಗವನ್ನು ಹೊಂದಿದ್ದು, 198 ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಘನತ್ಯಾಜ್ಯ ಸಂಸ್ಕರಣಾ ಘಟಕಗಳನ್ನು ಸ್ಥಾಪಿಸಲಾಗಿದ್ದು, ಸದರಿ ಘಟಕಗಳು ಭಾಗಶಃ ಕಾರ್ಯನಿರ್ವಹಿಸುತ್ತಿರುತ್ತವೆ. |
| ಇ) | ಉಳಿದ ನಗರ ಕೇಂದ್ರಗಳಲ್ಲಿ ಯಾವ ಕಾಲಮಿತಿಯಲ್ಲಿ ಘನತ್ಯಾಜ್ಯ ಸಂಸ್ಕರಣಾ ಘಟಕಗಳನ್ನು ಸ್ಥಾಪಿಸಲಾಗುವುದು ಇದರ ನಿರ್ವಹಣೆಗಾಗಿ ಕೈಗೊಳ್ಳಲಾಗುವ ಕ್ರಮಗಳೇನು; | ರಾಜ್ಯದಲ್ಲಿ ಇನ್ನೂ 61 ನಗರ ಸ್ಥಳೀಯ ಸಂಸ್ಥೆಗಳಲ್ಲಿ ತ್ಯಾಜ್ಯ ಸಂಸ್ಕರಣೆಗಾಗಿ ಜಾಗವನ್ನು ಹೊಂದಬೇಕಿದ್ದು, ಸದರಿ ನಗರ ಸ್ಥಳೀಯ ಸಂಸ್ಥೆಗಳು ಇತ್ತೀಚೆಗೆ ಮೇಲ್ದರ್ಜೆಗೇರಲ್ಪಟ್ಟಿರುವುದರಿಂದ ಘನತ್ಯಾಜ್ಯ ಸಂಸ್ಕರಣಾ ಘಟಕಗಳನ್ನು ಸ್ಥಾಪಿಸಲು ಭೂಮಿಯನ್ನು ಗುರುತಿಸುವ ಕಾರ್ಯವು ಪ್ರಗತಿಯಲ್ಲಿರುತ್ತದೆ.<br>ಹಾಲಿ ರಾಜ್ಯದ 171 ನಗರ ಸ್ಥಳೀಯ ಸಂಸ್ಥೆಗಳಲ್ಲಿ ತ್ಯಾಜ್ಯ ನಿರ್ವಹಣೆಗಾಗಿ ಸಿವಿಲ್ ಮತ್ತು ವಾಹನ/ಯಂತ್ರೋಪಕರಣಗಳ ಖರೀದಿಗೆ ಸಂಬಂಧಿಸಿದಂತೆ ಟೆಂಡರ್ ಪ್ರಕ್ರಿಯೆಯು ಚಾಲನೆಯಲ್ಲಿರುತ್ತದೆ.<br>ಈ ಪೈಕಿ 1,801 ಸಿವಿಲ್ ಕಾಮಗಾರಿಗಳ ಟೆಂಡರ್ ಕರೆಯಲಾಗಿದ್ದು, 206 ಕಾಮಗಾರಿಗಳು ಪೂರ್ಣಗೊಂಡಿರುತ್ತವೆ ಮತ್ತು ವಾಹನ |

| | | |
|---|---|---|
| | | ಯಂತ್ರೋಪಕರಣಗಳಗಾಗಿ 626 ಟೆಂಡರ್ ಕರೆಯಲಾಗಿದ್ದು 205 ಕಾಮಗಾರಿಗಳು ಪೂರ್ಣಗೊಂಡಿರುತ್ತದೆ.<br>ಒಟ್ಟಾರೆ ಮಾರ್ಚ್-2021ರೊಳಗಾಗಿ ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನ ತ್ಯಾಜ್ಯ ವಸ್ತು ನಿರ್ವಹಣ ಸೌಲಭ್ಯಗಳನ್ನು ಪೂರ್ಣಪ್ರಮಾಣದಲ್ಲಿ ಅಭಿವೃದ್ಧಿ ಪಡಿಸಲು ಯೋಜಿಸಲಾಗಿದೆ.<br>ತ್ಯಾಜ್ಯ ಸಂಸ್ಕರಣಾ ಘಟಕಗಳ ಕಾರ್ಯಾಚರಣೆ ಮತ್ತು ನಿರ್ವಹಣೆಗಾಗಿ ಅಗತ್ಯವಾದ ಮಾನವ ಸಂಪನ್ಮೂಲವನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಕ್ರಮ ಕೈಗೊಳ್ಳಲಾಗುವುದು. |
| ಈ) | ಈ ಯೋಜನೆಯ ರೂಪು-ರೇಷೆಗಳ ಬಗ್ಗೆ ವಿವರವಾದ ಮಾಹಿತಿ ನೀಡುವುದು ಸದರಿ ಯೋಜನೆಯ ಅನುಷ್ಠಾನಗಳಗೆ ಸರ್ಕಾರದಿಂದ ಎಷ್ಟು ಹಣವನ್ನು ಮೀಸಲಿಡಲಾಗಿದೆ? | ಘನತ್ಯಾಜ್ಯ ವಸ್ತುಗಳ ಸಮರ್ಪಕ ನಿರ್ವಹಣೆಗಾಗಿ ಘನತ್ಯಾಜ್ಯ ನಿರ್ವಹಣಾ ನಿಯಮಗಳು-2016ರನ್ವಯ ಮನೆ-ಮನೆಗಳಿಂದ ಮೂರು ವಿಧದಲ್ಲಿ ಅಂದರೆ, ಒಣ, ಹಸಿ ಮತ್ತು ಗೃಹ ಹಾನಿಕಾರಕ ತ್ಯಾಜ್ಯ ಎಂಬ ವಿಧಗಳಲ್ಲಿ ಪ್ರತ್ಯೇಕವಾಗಿ ಸಂಗ್ರಹಿಸಿ ಹಸಿತ್ಯಾಜ್ಯವನ್ನು ಎರೆಹುಳು ಗೊಬ್ಬರ, ವಿಂಡ್ರೋ ಕಾಂಪೋಸ್ಟಿಂಗ್, ಬಯೋಮಿಥೇನೇಶನ್ ವಿಧಾನದಲ್ಲಿ ಸಂಸ್ಕರಿಸಿ ಸಾವಯವ ಗೊಬ್ಬರ ಅಥವಾ ಅಡುಗೆ ಅನಿಲ ಉತ್ಪಾದಿಸುವ ಹಾಗೂ ಒಣತ್ಯಾಜ್ಯದಲ್ಲಿರುವ ಪುನರ್ ಬಳಕೆಗೆ ಯೋಗ್ಯವಿರುವ ವಸ್ತುಗಳನ್ನು ರೀಸೈಕ್ಲಿಂಗ್ ಘಟಕಗಳಗೆ, ಪುನರ್ ಬಳಸಲು ಸಾಧ್ಯವಿಲ್ಲದಿರುವ ತ್ಯಾಜ್ಯವನ್ನು ಆರ್.ಡಿ.ಎಫ್ (Refused Derived Fuel)ಆಗಿ ಪರಿವರ್ತಿಸಿ ಸಿಮೆಂಟ್ ಘಟಕಗಳಲ್ಲಿ ಪರ್ಯಾಯ ಇಂಧನವನ್ನಾಗಿ, ಪ್ಲಾಸ್ಟಿಕ್ ತ್ಯಾಜ್ಯವನ್ನು ರಸ್ತೆಗಳ ಅಭಿವೃದ್ಧಿಗೆ ಬಳಸಬೇಕಿರುತ್ತದೆ.<br>ಬೃಹತ್ ತ್ಯಾಜ್ಯ ಉತ್ಪಾದಕರು (ಪ್ರತಿ ದಿನ 100 ಕೆ.ಜಿ ಗಿಂತ ಮೇಲ್ಪಟ್ಟು) ಮೂಲದಲ್ಲಿಯೇ ಮೂರು ವಿಧದಲ್ಲಿ ಪ್ರತ್ಯೇಕಿಸಿ ತಮ್ಮ ಸ್ಥಳದಲ್ಲಾಗಲೀ ಅಥವಾ ನಗರ ಸ್ಥಳೀಯ ಸಂಸ್ಥೆ ಮೀಸಲಿರಿಸಿದ ಜಾಗೆಯಲ್ಲಿ ತಮ್ಮ ಹಣಕಾಸಿನ ಸಂಪನ್ಮೂಲಗಳಿಂದ ಸಂಸ್ಕರಣ ಘಟಕ ಸ್ಥಾಪಿಸಿ ನಿಸ್ಸತ್ವವನ್ನು ಮಾತ್ರ ನಗರ ಸ್ಥಳೀಯ ಸಂಸ್ಥೆಗೆ ನೀಡುವುದಾಗಿದೆ. ಇದರ ಬದಲಾಗಿ ಸ್ಥಳೀಯ ಸಂಸ್ಥೆ ಸ್ಥಾಪಿಸಿರುವ ಘಟಕವನ್ನು ಬಳಸಿದಿದಲ್ಲಿ ಸ್ಥಳೀಯ ಸಂಸ್ಥೆಗೆ ನಿಯಮಾನುಸಾರ ಸೇವಾ ಶುಲ್ಕವನ್ನು ನೀಡುವುದಾಗಿದೆ.<br>ಸದರಿ ಯೋಜನೆಯ ಅನುಷ್ಠಾನಕ್ಕೆ ಕೇಂದ್ರ ಮತ್ತು ರಾಜ್ಯ ಸರ್ಕಾರದ ಪಾಲಿನ ಅನುದಾನದಿಂದ ರೂ.1123.19 ಕೋಟಿಗಳನ್ನು ಮೀಸಲಿಡಲಾಗಿದೆ. |

ಸಂಖ್ಯೆ: ನಅಇ 105 ಸಿಎಸ್‌ಎಸ್ 2020

(ನಾರಾಯಣ ಗೌಡ)
ಪೌರಾಡಳಿತ ಹಾಗೂ
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು.